ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 803 |
| ಸದಸ್ಯರ ಹೆಸರು | : | ಶ್ರೀ ಎಸ್.ರವಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸುವ ದಿನಾಂಕ | : | 11.03.2020. |
| ಉತ್ತರಿಸುವ ಸಚಿವರು | : | ಉಪಮುಖ್ಯಮಂತ್ರಿ<br>ಲೋಕೋಪಯೋಗಿ ಮತ್ತು<br>ಸಮಾಜ ಕಲ್ಯಾಣ ಇಲಾಖೆ |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ರಾಮನಗರ ಮತ್ತು ಬೆಂಗಳೂರು ಗ್ರಾಮಾಂತರ ಎನ್.ಹೆಚ್.209 ಬೆಂಗಳೂರು-ಕನಕಪುರ ಚತುಷ್ಪಥ ರಸ್ತೆ ಸಮರ್ಪಕವಾಗಿ ಮುಗಿಯದೇ ಈ ಭಾಗದಲ್ಲಿ ದಿನ ನಿತ್ಯ ಪ್ರಯಾಣಿಸುವ ಸಾರ್ವಜನಿಕರಿಗೆ ವಿಳಂಬದಿಂದ ಬಹಳ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಈ ವಿಳಂಬಕ್ಕೆ ಕಾರಣಗಳೇನು; (ವಿವರ ನೀಡುವುದು) | ಬಂದಿದೆ.<br>ರಾಷ್ಟ್ರೀಯ ಹೆದ್ದಾರಿ-209 ಬೆಂಗಳೂರು-ಕನಕಪುರ-ದಿಂಡಿಗಲ್ ವರೆಗಿನ ರಸ್ತೆಯನ್ನು ಪಟ್ಟಣದ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ (ಬಿ.ಬಿ.ಎಂ.ಪಿ) ಪರಿಮಿತಿಯನ್ನು ಹೊರತುಪಡಿಸಿ ದಿನಾಂಕಃ 9-5-2017ರಂದು ಭಾರತೀಯ ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರಕ್ಕೆ ಹಸ್ತಾಂತರಿಸಲಾಗಿರುತ್ತದೆ. ಸದರಿ ಹೆದ್ದಾರಿ ರಸ್ತೆಯ ಅಭಿವೃದ್ಧಿಯನ್ನು ಮೆ:ಸದ್ಭಾವ್ ಹೈವೇ ಪ್ರೈವೇಟ್ ಲಿಮಿಟೆಡ್‌ರವರಿಗೆ ವಹಿಸಿಕೊಡಲಾಗಿದೆ. ಗುತ್ತಿಗೆ ಕರಾರಿನ ಪ್ರಕಾರ ದಿನಾಂಕಃ21-08-2019 ರಂದು ಕಾಮಗಾರಿಯನ್ನು ಪೂರ್ಣಗೊಳಿಸಬೇಕಾಗಿತ್ತು. ಆದರೆ, ಆರ್ಥಿಕ ಸಂಕಷ್ಟ ಹಾಗೂ ಹಲವು ಅನುಮೋದನೆಗಳು ಮತ್ತು ಕ್ಲಿಯರೆನ್ಸ್‌ಗಳನ್ನು ಪಡೆಯಲು ವಿಳಂಬವಾಗುತ್ತಿರುವ ಹಿನ್ನೆಲೆಯಲ್ಲಿ ನಿಗದಿತ ಸಮಯದೊಳಗೆ ಕಾಮಗಾರಿಯನ್ನು ಪೂರ್ಣಗೊಳಿಸಲು ಸಾಧ್ಯವಾಗಿರುವುದಿಲ್ಲ. ಮಾನ್ಯ ಕೇಂದ್ರ ಭೂಸಾರಿಗೆ ಹಾಗೂ ಹೆದ್ದಾರಿಗಳ ಸಚಿವಾಲಯದ ಸಚಿವರ ಸಮ್ಮುಖದಲ್ಲಿ ದಿನಾಂಕಃ 24-01-2020 ರಂದು ದೆಹಲಿಯಲ್ಲಿ ನಡೆದ ಸಭೆಯಲ್ಲಿ ರಿಯಾಯಿತಿದಾರ ಮ್ಯಾನೇಜ್‌ಮೆಂಟ್‌ರವರು ಆದಷ್ಟು ಶೀಘ್ರವಾಗಿ ಕಾಮಗಾರಿಯನ್ನು ಪೂರ್ಣಗೊಳಿಸುವುದಾಗಿ ಆಶ್ವಾಸನೆಯನ್ನು ನೀಡಿರುತ್ತಾರೆ. |
| (ಆ) | ಎನ್.ಹೆಚ್-209 ಬೆಂಗಳೂರು-ದಿಂಡಿಗಲ್ ರಸ್ತೆಗಾಗಿ ಒಟ್ಟು ಭೂಸ್ವಾಧೀನದ ಜಮೀನು ಎಷ್ಟು; ಇದರಲ್ಲಿ ಸರ್ಕಾರಿ ಜಮೀನು ಎಷ್ಟು; ಅರಣ್ಯ ಇಲಾಖೆ ಜಮೀನು ಎಷ್ಟು; ಹಿಡುವಳಿ ಜಮೀನುಗಳು ಎಷ್ಟು; ಹಾಗೂ ಇನ್ನು ಯಾವುದಾದರೂ ಭೂಸ್ವಾಧೀನಗೊಳ್ಳದೇ ತಕರಾರುಗಳು ಇರುವ ಜಮೀನುಗಳು ಏನಾದರೂ ಇದೆಯೇ? (ವಿವರ ನೀಡುವುದು) | (see table below) |

| | |
|---|---|
| ಎನ್.ಹೆಚ್-209 ಬೆಂಗಳೂರು-ದಿಂಡಿಗಲ್ ರಸ್ತೆಗಾಗಿ ಒಟ್ಟು ಅಗತ್ಯವಿರುವ ಜಮೀನು | 346.15 ಹೆಕ್ಟೇರ್ |
| 3ಡಿ ಅನುಸಾರ ಭೂಸ್ವಾಧೀನಪಡಿಸಿ ಕೊಂಡಿರುವ ಜಮೀನು | 322.38 ಹೆಕ್ಟೇರ್ |
| ಭೂಸ್ವಾಧೀನಗೊಂಡಿರುವ ಸರ್ಕಾರಿ ಜಮೀನು ವಿಸ್ತಾರ | 33.54 ಹೆಕ್ಟೇರ್ಸ್ |
| ಭೂಸ್ವಾಧೀನಗೊಂಡಿರುವ ಅರಣ್ಯ ಭೂಮಿ | 10.30 ಹೆಕ್ಟೇರ್ |
| ಭೂಸ್ವಾಧೀನಗೊಂಡ ಖಾಸಗಿ ಭೂಮಿಯ ವಿಸ್ತಾರ | 288.84 ಹೆಕ್ಟೇರ್ಸ್ |
| ಭೂಸ್ವಾಧೀನಪಡಿಸಿಕೊಳ್ಳದೆ ತಕರಾರು ಇರುವ ಜಮೀನು | ಯಾವುದೂ ಇರುವುದಿಲ್ಲ. |

ಕಡತ ಸಂಖ್ಯೆ: ಲೋಇ 58 ಸಿಎನ್‌ಹೆಚ್ 2020 (ಇ)

(ಗೋವಿಂದ.ಎಂ.ಕಾರಜೋಳ)
ಉಪ ಮುಖ್ಯಮಂತ್ರಿ
ಲೋಕೋಪಯೋಗಿ ಮತ್ತು
ಸಮಾಜ ಕಲ್ಯಾಣ ಇಲಾಖೆ